1731260/2020/BU

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನ ಸಭೆಯಿಂದ ಚುನಾಯಿತರಾದವರು). |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 147 (259) |
| ಉತ್ತರಿಸಬೇಕಾದ ದಿನಾಂಕ | : | 22.09.2020. |
| ಉತ್ತರಿಸಬೇಕಾದವರು | : | ನಗರಾಭಿವೃದ್ಧಿ ಸಚಿವರು |

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ಬೀದರ್ ನಗರದಲ್ಲಿ ಜರುಗುತ್ತಿರುವ ಒಳ ಚರಂಡಿ ಮತ್ತು 24/7 ಕುಡಿಯುವ ನೀರು ಸರಬರಾಜು ಕಾಮಗಾರಿ ಕಳಪೆ ಮಟ್ಟದಿಂದ ಕೂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ತನಿಖೆಗೆ ಸರ್ಕಾರ ಕ್ರಮ ಕೈಗೊಳ್ಳುವುದೆಯೇ ?</td><td>ಏಷ್ಯಿಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ಉತ್ತರ ಕರ್ನಾಟಕ ನಗರ ವಲಯ ಬಂಡವಾಳ ಹೂಡಿಕೆ ಕಾರ್ಯಕ್ರಮದಡಿಯಲ್ಲಿ (ಎನ್‌ಕೆಯುಎಸ್‌ಐಪಿ) ಬೀದರ್ ನಗರದಲ್ಲಿ ಕೈಗೊಳ್ಳುತ್ತಿರುವ ಒಳಚರಂಡಿ ಕಾಮಗಾರಿಯಲ್ಲಿ ದೋಷವಿರುವ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆ.<br><br>24/7 ಕುಡಿಯುವ ನೀರು ಸರಬರಾಜು ಯೋಜನೆಯ ಗುಣಮಟ್ಟದ ಬಗ್ಗೆ ಯಾವುದೇ ದೂರು ಇರುವುದಿಲ್ಲ. ಒಳಚರಂಡಿ ಕಾಮಗಾರಿಯ ಜಲ ತ್ಯಾಜ್ಯ ಸಂಸ್ಕರಣ ಘಟಕದಲ್ಲಿ ತ್ಯಾಜ್ಯವು ಸೋರುತ್ತಿರುವ ಬಗ್ಗೆ ದೂರು ಬಂದಿರುತ್ತದೆ. ಈ ಬಗ್ಗೆ ದೋಷ ಪರಿಹಾರ ಮಾಡಲು ಕರ್ನಾಟಕ ನಗರ ಮೂಲ ಸೌಕರ್ಯ ಅಭಿವೃದ್ಧಿ ಸಂಸ್ಥೆಯ ತಾಂತ್ರಿಕ ಸಮಿತಿಯಿಂದ ವರದಿ ಪಡೆದು ಜಲ ತ್ಯಾಜ್ಯ ಸಂಸ್ಕರಣ ಘಟಕದಲ್ಲಿ ಸೋರಿಕೆಯಾಗುತ್ತಿರುವ ತ್ಯಾಜ್ಯವನ್ನು ತಡೆಗಟ್ಟಲು ಕ್ರಮ ವಹಿಸಲಾಗುವುದು.<br><br>ವಲಯ-2 ಮತ್ತು 3 ರಲ್ಲಿ ಒಳಚರಂಡಿ ಕಾಮಗಾರಿಗಳನ್ನು ಕೇಂದ್ರ ಪುರಸ್ಕೃತ "ಅಮೃತ್" ಯೋಜನೆಯಡಿ ಕೈಗೊಳ್ಳಲಾಗಿರುತ್ತದೆ ಸದರಿ ಕಾಮಗಾರಿಗಳು ಕಳಪೆಯಾಗಿರುವುದಿಲ್ಲ ಹಾಗೂ ಈ ಬಗ್ಗೆ ಇದುವರೆಗೂ ಯಾವುದೇ ದೂರುಗಳು ಬಂದಿರುವುದಿಲ್ಲ.</td></tr>
<tr><td>ಆ</td><td>ಸದರಿ ಕಾಮಗಾರಿಗಳಿಗೆ ಸರ್ಕಾರದಿಂದ ಒಟ್ಟು ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ; ಇಲ್ಲಿಯವರೆಗೆ ಎಷ್ಟು ಕಿ.ಮೀ ಕಾಮಗಾರಿ ಮುಗಿದಿದೆ; ಇದಕ್ಕಾಗಿ ಎಷ್ಟು ಹಣ ಖರ್ಚು ಮಾಡಲಾಗಿದೆ ? (ವಿವರವಾದ ಮಾಹಿತಿ ನೀಡುವುದು)</td><td>ಸದರಿ ಕಾಮಗಾರಿಗಳಿಗೆ ಬಿಡುಗಡೆಯಾದ ಅನುದಾನದ ವಿವರ ಕೆಳಕಂಡಂತಿದೆ.<br><table><tr><th>ಕ್ರ.ಸಂ</th><th>ಕಾಮಗಾರಿ</th><th>ಬಿಡುಗಡೆಯಾದ ಮೊತ್ತ ರೂ.ಕೋಟಿಗಳಲ್ಲಿ.</th></tr><tr><td>1</td><td>ಒಳಚರಂಡಿ ಕಾಮಗಾರಿ</td><td>57.77</td></tr><tr><td>2</td><td>24/7 ನೀರು ಸರಬರಾಜು ಕಾಮಗಾರಿ</td><td>35.00</td></tr></table>ಕಾಮಗಾರಿಯ ಪ್ರಗತಿಯ ವಿವರ:<br><table><tr><th>ಕ್ರ.ಸಂ</th><th>ಕಾಮಗಾರಿ</th><th>ಗುರಿ</th><th>ಪ್ರಗತಿ</th></tr><tr><td>1</td><td colspan="3">ಒಳಚರಂಡಿ</td></tr><tr><td></td><td>ಒಳಚರಂಡಿ ಜಾಲ</td><td>88.00 ಕಿ.ಮೀ</td><td>83.00 ಕಿ.ಮೀ</td></tr></table></td></tr>
</table>

| | | | |
|---|---|---|---|
| | ಎಸ್.ಟಿ.ಪಿ ಘಟಕ (17.26 ಎಂಎಲ್‌ಡಿ) | 1 ಸಂಖ್ಯೆ | 1 ಸಂಖ್ಯೆ * |
| | 24/7 ನೀರು ಸರಬರಾಜು | | |
| | ವಿತರಣ ಜಾಲ | 106 ಕಿ.ಮೀ | 135 ಕಿ.ಮೀ |

24/7 ನೀರು ಸರಬರಾಜು ಕಾಮಗಾರಿ ಪೂರ್ಣಗೊಂಡಿದ್ದು, ಗುತ್ತಿಗೆದಾರರು ಕರಾರಿನಂತೆ ಕಾರ್ಯಚರಣೆ ಮತ್ತು ನಿರ್ವಹಣೆಯನ್ನು ದಿನಾಂಕ: 01/04/2020 ರಿಂದ ನಿರ್ವಹಿಸುತ್ತಿರುತ್ತಾರೆ

ಮಂಡಳಿ ವತಿಯಿಂದ ಬೀದರ್ ನಗರದ ಐದು ವಲಯಗಳಲ್ಲಿ ಕುಡಿಯುವ ನೀರಿನ ವಿತರಣಾ ಜಾಲ ಅಳವಡಿಸುವ ಯೋಜನೆಗೆ ರೂ.2490.50 ಲಕ್ಷಗಳಿಗೆ ಅನುಮೋದನೆಯಾಗಿದ್ದು, 90 ಕಿ.ಮೀ ವಿತರಣಾ ಜಾಲ ಅಳವಡಿಸಿ 2016 ರಲ್ಲಿ ಚಾಲನೆಗೊಳಿಸಿದೆ. ಈ ಯೋಜನೆಗೆ ಇಲ್ಲಿಯವರೆಗೂ ರೂ.2284.90 ಲಕ್ಷಗಳನ್ನು ವೆಚ್ಚ ಮಾಡಿ, ಮುಕ್ತಾಯ ವರದಿ ಸಲ್ಲಿಸಲಾಗಿದೆ.

ಬೀದರ ನಗರದ ವಲಯ-2 ರ ಒಳಚರಂಡಿ ಯೋಜನೆಗೆ ರೂ.9518.99 ಲಕ್ಷ ಹಾಗೂ ವಲಯ-3 ರ ಒಳಚರಂಡಿ ಯೋಜನೆಗೆ ರೂ.2485.12 ಲಕ್ಷಗಳನ್ನು ಸರ್ಕಾರದಿಂದ ಬಿಡುಗಡೆ ಮಾಡಲಾಗಿದೆ. ಇಲ್ಲಿಯವರೆಗೆ ವಲಯ-2 ರ ಒಳಚರಂಡಿ ಯೋಜನೆಯಡಿ 131 ಕಿ.ಮೀ. ಹಾಗೂ ವಲಯ-3 ರ ಒಳಚರಂಡಿ ಯೋಜನೆಯಡಿ 55 ಕಿ.ಮೀ. ಉದ್ದದ ಒಳಚರಂಡಿ ಕೊಳವೆ ಮಾರ್ಗ ಅಳವಡಿಸಲಾಗಿದೆ.

ವಲಯ-2 ರ ಒಳಚರಂಡಿ ಯೋಜನೆಯಡಿ ರೂ.9575.32 ಲಕ್ಷ ಹಾಗೂ ವಲಯ-3 ರ ಒಳಚರಂಡಿ ಯೋಜನೆಯಡಿ ರೂ.2457.49 ಲಕ್ಷಗಳನ್ನು ಖರ್ಚು ಮಾಡಲಾಗಿದೆ.

ಸಂಖ್ಯೆ: ನಅಇ 118 ಯುಎಂಎಸ್ 2020

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು